# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

6ನೇ ವರ್ಷ 31ನೇ ಸಂಚಿಕೆ ಕೊಪ್ಪ 28-2-1988 ಭಾನುವಾರ ಬೆಲೆ 50 ಪೈಸೆ


## ಮತ್ತೊಂದು ಜಾತ್ಯತೀತ ಸರಳ ವಿವಾಹ

(ವರದಿ : ಸುಧೀರ್ ಆನಂದೂರು)

ಕೊಪ್ಪ : ಇಲ್ಲಿಗೆ ಸಮೀಪದ ಕೊಪ್ಪ ಘಾಟಿಯ ನಿವಾಸಿಗಳಾದ ಸಿಗದಾಳು ಪ್ರಶಾಂತ್ ಕುಮಾರ್ ಮತ್ತು ಸುಜಾತಾ ಎಂಬ ಯುವ ಪ್ರೇಮಿಗಳು ಫೆ. 20ರಂದು ನೆಮ್ಮಾರಿನ ಸಮೀಪದ ಅರಳೆಗುಡ್ಡೆ ದೇವಸ್ಥಾನದಲ್ಲಿ ಸ್ನೇಹಿತರು ಮತ್ತು ಆಪ್ತ ಬಂಧುಗಳ ಸಮ್ಮುಖದಲ್ಲಿ ಸರಳ ರೀತಿಯಲ್ಲಿ ಮದುವೆಯಾಗಿದ್ದಾರೆ.

ಈ ಸಮಾಜವನ್ನು, ಅದರಲ್ಲೂ ಮುಖ್ಯವಾಗಿ ಯುವ ಚೇತನಗಳನ್ನು ಬಲಿಯಾಗಿಸುತ್ತಿರುವ ಜಾತಿ ಮತ್ತು ಅರ್ಥಹೀನ ಸಂಪ್ರದಾಯಗಳ ಉಕ್ಕಿನ ಹಿಡಿತದಿಂದ ತಪ್ಪಿಸಿಕೊಂಡು ಜಾತ್ಯತೀತ ರೀತಿಯಲ್ಲಿ ಹೊಸ ಬದುಕಿಗೆ ಕಾಲಿಟ್ಟಿರುವ ಈ ನವದಂಪತಿಗಳಿಗೆ ಆತ್ಮೀಯರು ಶುಭ ಕೋರಿದ್ದಾರೆ.

### ಬೀಳ್ಕೊಡುಗೆ

ಬಂಡಿಗಡಿ : ಇಲ್ಲಿನ ಹಿ. ಪ್ರಾ. ಶಾಲೆಯಲ್ಲಿ ಶಿಕ್ಷಕರಾಗಿದ್ದು ನಿವೃತ್ತರಾಗಿರುವ ಅನಂತಯ್ಯನವರಿಗೆ ಫೆ. 19ರಂದು ಶಾಲಾ ತನಿಖಾಧಿಕಾರಿ ಬಿ. ಲಕ್ಷ್ಮೀನಾರಾಯಣ ಅವರ ಅಧ್ಯಕ್ಷತೆಯಲ್ಲಿ ಹೃತ್ಪೂರ್ವಕ ಬೀಳ್ಕೊಡುಗೆ ಸಮಾರಂಭ ನಡೆದು ನೆನಪಿನ ಕಾಣಿಕೆ ನೀಡಿ ಅವರನ್ನು ಸನ್ಮಾನಿಸಲಾಯಿತು. (ವರದಿ : ಬಿ. ಎನ್. ಭಾಸ್ಕರ್)

### ಕುಡುಕರ ಹಾವಳಿ

ಬಂಡಿಗಡಿ: ಇಲ್ಲಿ ರಾತ್ರಿಯ ವೇಳೆ ಕುಡುಕರ ಹಾವಳಿ ವಿಪರೀತ ಹೆಚ್ಚಿದೆ; ಕುಡಿದು ರಾತ್ರಿ 12 ಗಂಟೆ, 1 ಗಂಟೆಯವರೆಗೂ ಗಲಾಟೆ ಮಾಡುತ್ತಿರುತ್ತಾರೆ. ಸಾರ್ವಜನಿಕರಿಗೆ ಇದರಿಂದ ಬಹಳ ತೊಂದರೆಯಾಗಿದ್ದು, ಪೋಲೀಸರು ಈ ಬಗ್ಗೆ ಕ್ರಮ ಕೈಗೊಳ್ಳಬೇಕೆಂದು ಗ್ರಾಮಸ್ಥರು ಒತ್ತಾಯಿಸಿದ್ದಾರೆ.

### ಶೃಂಗೇರಿ ಕಾಲೇಜಿನ ಕಲಾಸಂಘದ ಸಮಾರೋಪ

ಶೃಂಗೇರಿ : ಜೆ.ಸಿ ಬಿ.ಎಂ. ಕಾಲೇಜಿನ ಕಲಾ ಸಂಘದ ಸಮಾರೋಪ ಸಮಾರಂಭ ಫೆ. 20ರಂದು ಎ. ಕೆ. ಭಟ್ ಅಧ್ಯಕ್ಷತೆಯಲ್ಲಿ ನಡೆಯಿತು. ಮುಖ್ಯ ಅತಿಥಿಗಳಾಗಿದ್ದ ಮಂಗಳ ಗಂಗೋತ್ರಿಯ ಕನ್ನಡ ವಿಭಾಗದ ಉಪನ್ಯಾಸಕ ಡಾ|| ಅರವಿಂದ ಮಾಲಗತ್ತಿಯವರು ವಿವಿಧ ಸ್ಪರ್ಧೆಗಳ ವಿಜೇತರಿಗೆ ಬಹುಮಾನ ವಿತರಣೆ ಮಾಡಿದರು.

ಅರ್ಥಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿದ್ದು ನಿವೃತ್ತರಾಗಿರುವ ರಾಮೋಜಿ ರಾವ್ ಅವರನ್ನು ಕಲಾ ಸಂಘದ ವತಿಯಿಂದ ಸನ್ಮಾನಿಸಲಾಯಿತು. ಪ್ರಿನ್ಸಿಪಾಲ್ ಪ್ರೊ|| ಕೃಷ್ಣಸ್ವಾಮಿ, ಉಪನ್ಯಾಸಕರಾದ ಕೆ. ಪುಟ್ಟಯ್ಯ, ಕೃಷ್ಣ ಸ್ವಾಮಿ, ಜಿ. ಎಂ. ಭಟ್ ಮಾತನಾಡಿದರು.

ಎಚ್. ಎಸ್. ಸುಂದರೇಶ್ ಸ್ವಾಗತಿಸಿದರು; ಕೆ. ಎ. ಇರ್ಷಾದ್ ಕಲಾಸಂಘದ ವರದಿ ಓದಿದರು; ಬಿ.ಎಂ. ರಮೇಶ್ ವಂದನಾರ್ಪಣೆ ಮಾಡಿದರು. ವಿದ್ಯಾರ್ಥಿಗಳಿಂದ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು.

ಬಡ, ಮುಗ್ಧರನ್ನು ಭೀತಿಗೊಳಿಸುವ ನೀಚತನ :

# ಹಗಲುಗಳ್ಳ ಮಾಟ-ಮಂತ್ರದ ಮಾಯಣ್ಣಾರು !

(ವರದಿ : ಕೃಷ್ಣ ಭಂಡಾರಿ)

**ಜಯಪುರ : ಏನೂ ಅರಿಯದ ಮುಗ್ಧ ಬಡ ವ್ಯಕ್ತಿಯೊಬ್ಬನಿಗೆ "ಮಾಟ-ಮಂತ್ರ" ಮಾಡಿ ಮನೆ ಖಾಲಿ ಮಾಡಿಸಲು ಯತ್ನಿಸಿದ ಪ್ರಕರಣವೊಂದು ಇಲ್ಲಿ ನಡೆದು ಜನರಿಗೆ ನೆಗಾಡುವ ವಸ್ತುವಾಗಿದೆ.**

ಇಲ್ಲಿನ ಗಜಾನನ ರೈಸ್ ಮಿಲ್ ಬಳಿ ಸುಮಾರು 15 ವರ್ಷಗಳಿಂದ ಮನೆ ಕಟ್ಟಿಕೊಂಡಿರುವ ಗೋಪಾಲಾಚಾರಿ ಅವರ ಮನೆಗೆ ಫೆ.23ರ ಬೆಳಿಗ್ಗೆ 11 ಗಂಟೆ ಸುಮಾರಿಗೆ ಹರಿಹರಪುರದ ನಾಗರಾಜಾಚಾರಿ, ರಾಮಪ್ಪಾಚಾರಿ ಮುಂತಾದ ನಾಲ್ಕೈದು ಜನ ದಿಢೀರನೆ ಬಂದು ಮನೆ ಖಾಲಿ ಮಾಡುವಂತೆ ಒತ್ತಾಯಿಸಿದರು. ಒಪ್ಪದಿದ್ದಾಗ, ಅವರೊಂದಿಗೆ ಬಂದಿದ್ದ ಜುಟ್ಟಿನ 'ಮಂತ್ರವಾದಿ' ಇವರ ಮನೆ ಬಾಗಿಲಲ್ಲೇ ಒಂದು ಕಲ್ಲು ಇಟ್ಟು, ಲಿಂಬೆ, ಕುಂಬಳ ಕಾಯಿ, ಅರಿಶಿನ, ಕುಂಕುಮ ಮುಂತಾದ ವಸ್ತುಗಳಿಂದ ಭೀಕರವಾದ 'ಮಾಟ'ದ ಪೂಜೆ ಮಾಡಿ, "ಇನ್ನು 40 ದಿನದೊಳಗೆ ಮನೆ ಬಿಡದಿದ್ದರೆ ನೀವೆಲ್ಲ ನಿರ್ವಂಶವಾಗ್ತೀರಿ" ಎಂದು ಬೆದರಿಕೆ ಹಾಕಿ ಹೋದರು.

ಅಷ್ಟೇನೂ ಚುರುಕಿನವರಲ್ಲದ, ಸ್ವಲ್ಪ ಕಿವಿ ಕೇಳದ ಗೋಪಾಲಾಚಾರಿ ಈ ಪೂಜೆ ನಡೆಯುವ ಅರ್ಧ ತಾಸು ಹೊತ್ತು ಮರ ಗಟ್ಟಿದವರಂತೆ ನಿಶ್ಚಲವಾಗಿ ನಿಂತೇ ಇದ್ದರು. ಕೊನೆಗೆ ನೆರೆಹೊರೆಯವರ ಸೂಚನೆಯಂತೆ ಪೋಲೀಸರಿಗೆ ದೂರು ಕೊಟ್ಟಾಗ ಆರೋಪಿಗಳನ್ನು ಕರೆಸಿ, ಮುಚ್ಚಳಿಕೆ ಮಾತ್ರ ಬರೆಸಿಕೊಂಡು ಬಿಟ್ಟುಬಿಟ್ಟಿದ್ದಾರೆ. ಅವರುಗಳು ಈ ಕೃತ್ಯಕ್ಕೆ ಮೊದಲೇ ದಫೇದಾರರನ್ನು 'ಕಂಡಿದ್ದರಂತೆ' ಎಂದು ಸುದ್ದಿ.

ಆರೋಪಿ ನಾಗರಾಜಾಚಾರಿ–ರಾಮಪ್ಪಾಚಾರಿಗಳು ಇಪ್ಪತ್ತೈದೋ ಮೂವತ್ತೋ ವರ್ಷಗಳ ಹಿಂದೆಂದೋ ಮನೆಕಟ್ಟಿಕೊಂಡಿದ್ದು ಬಿಟ್ಟು ಹೋಗಿ ಬೇರೆಡೆ ನೆಲೆಸಿದ ಎಷ್ಟೋ ವರ್ಷದ ಮೇಲೆ ಗೋಪಾಲಾಚಾರಿ ಆ ಜಾಗದಲ್ಲಿ ಮನೆ ಕಟ್ಟಿಕೊಂಡಿದ್ದು, ಅದನ್ನು ತೆರವು ಮಾಡಿಸಲು ಈ ನೀಚ ತಂತ್ರ ನಡೆಸಿದ್ದೆನ್ನಲಾಗಿದೆ.

ಹರಿಹರಪುರದ ಈ ಮಾಟ ಮಂತ್ರದ ಮಾಯಣ್ಣನಿಗೆ ಇದೇ 'ಕಸುಬು' ಎನ್ನಲಾಗಿದ್ದು, ಆತ ಅಂದು ಸ್ಟೇಶನ್‌ಗೆ ಹಾಜರಾಗದೆ ತಲೆ ತಪ್ಪಿಸಿಕೊಂಡ ಎನ್ನಲಾಗಿದೆ.

### ಹಸಿರು ಕಾರ್ಡ್ ಬದಲು ಕೇಸರಿ ಕಾರ್ಡ್ ಹಂಚಿಕೆ ವಿಳಂಬ: ಬಡವರಿಗೆ ತೊಂದರೆ

ಕೊಪ್ಪ : ಹಿಂದೆ ತರಾತುರಿಯಲ್ಲಿ ವಿತರಿಸಲಾಗಿದ್ದ ಹಸಿರು ಕಾರ್ಡ್‌ಗಳನ್ನು ಮರುಪರಿಶೀಲಿಸಿ, ಅನರ್ಹ ಕಾರ್ಡ್‌ಗಳನ್ನು ಮಂಡಲ ಪಂಚಾಯ್ತಿಗಳವರು ವಾಪ್ಸ ಪಡೆದು 2 ತಿಂಗಳ ಮೇಲಾಯಿತು. ಅವರಿಗೆಲ್ಲ ಕೇಸರಿ ಕಾರ್ಡ್‌ಗಳನ್ನು ಹಂಚುವ ಹೊಣೆಯನ್ನು ಬಿಡಿಒ ಅವರಿಗೆ ವಹಿಸಲಾಗಿತ್ತು. ಆದರೆ ಈ ಕೆಲಸ ಇನ್ನೂ ಆಗದೆ, ಎಲ್ಲಾ ಕಡೆ ಬಡವರಿಗೆ ತೊಂದರೆಯಾಗಿದೆ. ಈ ಮಾಜಿ ಕಾರ್ಡ್‌ದಾರರು ಪಡಿತರ ವಸ್ತುಗಳಿಗಾಗಿ ಬವಣೆ ಪಡುತ್ತ ಮಂ. ಪಂ.ಗಳಿಗೆ, ಸದಸ್ಯರಲ್ಲಿಗೆ ಅಲೆಯುತ್ತಿದ್ದಾರೆ. ಬೇಗನೆ ಸೂಕ್ತ ವ್ಯವಸ್ಥೆ ಆಗಬೇಕಾಗಿದೆ ಎಂದು, ಹಲವಾರು ಮಂಡಲ ಪಂಚಾಯಿತಿಗಳವರು ಒತ್ತಾಯಿಸಿದ್ದಾರೆ.

## ಜಯಪುರ ಸೊಸೈಟಿ ಅವ್ಯವಹಾರಗಳ ವರದಿ ಪ್ರಕಟಿಸಿ ಸಂಸ್ಥೆ ಪುನರ್ರಚಿಸಲು ಒತ್ತಾಯ

**ಜಯಪುರ : ಹಣ ದುರುಪಯೋಗ, ಅವ್ಯವಹಾರಗಳಿಂದ ಅಸ್ತವ್ಯಸ್ತಗೊಂಡಿರುವ ಇಲ್ಲಿನ ವ್ಯವಸಾಯ ಸೇವಾ ಸಹಕಾರ ಸಂಘದ ಸರ್ವ ಸದಸ್ಯರ ಸಭೆಯನ್ನು ಕೂಡಲೇ ಕರೆದು ಸಂಸ್ಥೆಯನ್ನು ಪುನರ್ರಚಿಸಬೇಕೆಂದು ಗ್ರಾಹಕರು ಒತ್ತಾಯಿಸಿದ್ದಾರೆ.**

4 ಲಕ್ಷ ರೂ. ಗಳಿಗೂ ಹೆಚ್ಚು ಹಣ ಗುಳುಂಗಡೆಯಾಗಿದೆ ಎನ್ನಲಾದ ಈ ಸಂಸ್ಥೆಯ ಲೆಕ್ಕ ಪತ್ರ, ವ್ಯವಹಾರಗಳ ಬಗ್ಗೆ ಎಲ್ಲಾ ತನಿಖೆಗಳಿಗೂ ಮುಗಿದಿವೆಯಾದರೂ ಇನ್ನೂ ಅದರ ಹೊಣೆ ನಿರ್ಣಯವಾಗದಿರುವುದರಿಂದ ರೈತರಿಗೆ ತೀವ್ರ ತೊಂದರೆಯಾಗಿದೆ. ಜನವರಿಯಲ್ಲೇ ಜನರಲ್ ಬಾಡಿ ಕರೆಯುವುದಾಗಿ ಡೆಪ್ಯುಟಿ ರಿಜಿಸ್ಟ್ರಾರ್ ಹೇಳಿದ್ದರೂ ಇನ್ನೂ ಕರೆದಿಲ್ಲ ಎಂದು ಗ್ರಾಹಕರೊಬ್ಬರು ತಿಳಿಸಿದ್ದಾರೆ

ಎಂದೋ ಸಾಲ ತೆಗೆದುಕೊಂಡು ತೀರ್ವಳಿ ಮಾಡಿರುವ ರೈತರಿಗೂ ಸಾಲ ಬಾಕಿಯ ನೋಟೀಸುಗಳು ಹೋಗಿದ್ದು, ಅಂಥವರು ತಮ್ಮ ರಶೀದಿಗಳನ್ನು ತೋರಿಸಿದರೂ ಎನ್‌ಓಸಿ ಕೊಟ್ಟಿಲ್ಲ. ಅಂಥ ಹಲವರಿಗೆ ಪಂಪ್ ಸೆಟ್, ಸ್ಪ್ರಿಂಕ್ಲರ್ ಮುಂತಾದುವುಗಳಿಗೆ ಭೂ ಅಭಿವೃದ್ಧಿ ಬ್ಯಾಂಕ್‌ಗಳಿಂದ ಸಾಲ ಮಂಜೂರಾಗಿದ್ದು, ಎನ್‌ಓಸಿ ಇಲ್ಲದೆ ಹಣ ಬಿಡುಗಡೆಯಾಗಿಲ್ಲ ಹೀಗಾಗಿ, ಮೊದಲೇ ಸಂಕಷ್ಟದಲ್ಲಿರುವ ರೈತರಿಗೆ ನೀರಿನ ಅಭಾವದ ಈ ದುರ್ದಿನಗಳಲ್ಲಿ ಅಸಾಧ್ಯ ತೊಂದರೆಯಾಗಿದೆ. ಕೂಡಲೇ ಆಡಿಟ್ ವರದಿ ಪ್ರಕಟಿಸಿ, ಸಾಲ ತೀರ್ವಳಿಯಾಗಿರುವ ರೈತರಿಗೆ ಚುಕ್ತಾ ಪಟ್ಟಿಗಳನ್ನು ಕೊಡುವುದಲ್ಲದೆ, ಸಂಘವನ್ನು ಪುನರ್ ವ್ಯವಸ್ಥೆಗೊಳಿಸಬೇಕು ಎಂದು ಗ್ರಾಹಕರುಗಳು ಒಕ್ಕೊರಲಿನಿಂದ ಒತ್ತಾಯಿಸುತ್ತಿದ್ದಾರೆ.

## ಮೇಗೂರಿನಲ್ಲಿ ಗಂಧದ ಕಳ್ಳರ ಬಂಧನ

ಶೃಂಗೇರಿ : ಕೊಪ್ಪ ತಾಲ್ಲೂಕಿನ ಗುಡ್ಡಗಾಡಿನ ಮೂಲೆಯಲ್ಲಿರುವ ಮೇಗೂರಿನಲ್ಲಿ ಹಲವಾರು ವರ್ಷಗಳಿಂದ ಗಂಧದ ಕಳ್ಳಸಾಗಾಣಿಕೆಯಲ್ಲಿ ನಿರತವಾಗಿದ್ದ ತಂಡವೊಂದನ್ನು ಬಂಧಿಸುವಲ್ಲಿ ಇಲ್ಲಿನ ವಲಯ ಅರಣ್ಯಾಧಿಕಾರಿ ಸೈಯದ್ ಗಫಾರ್ ಮತ್ತು ಅವರ ಸಿಬ್ಬಂದಿ ಯಶಸ್ವಿಯಾಗಿದ್ದಾರೆ.

ಹಲವು ದಿನಗಳಿಂದ ಹೊಂಚು ಹಾಕಿ ಕಾದಿದ್ದ ಈ ಅಧಿಕಾರಿ ಮತ್ತು ಸಿಬ್ಬಂದಿಗಳು ಫೆ. 22ರ ಅಪ ರಾತ್ರಿಯಲ್ಲಿ ದಾಳಿ ನಡೆಸಿದಾಗ ಸುಮಾರು 12 ಸಾವಿರ ರೂ ಬೆಲೆಯ 150 ಕಿಲೊ ಗಂಧದೊಂದಿಗೆ ಮೇಗೂರಿನ ಚಂದು, ಮತ್ತು ಎಡ್ವಿನ್ ಪಾಯ್ಸ್, ಕೊಗ್ರೆಯ ಜನಾರ್ದನ, ಮತ್ತು ಬಾಳೆಹೊಳೆಯ ಶ್ರೀಧರ ಎಂಬವರು ಸಿಕ್ಕಿಬಿದ್ದರು. ಆದರೆ ಇನ್ನೊಬ್ಬ ಪ್ರಮುಖ ಆರೋಪಿ ಹೆಗ್ಗಾರುಕೊಡಿಗೆಯ ರಮೇಶ ಎಂಬವ ತಲೆತಪ್ಪಿಸಿಕೊಂಡಿದ್ದಾನೆ

ಇವರುಗಳ ಕಳ್ಳ ಚಟುವಟಿಕೆ ಹಾಡೇ ಹಗಲು ಎಂಬಷ್ಟಾಗಿತ್ತೆಂದು ಹಳ್ಳಿಗರು ಹೇಳುತ್ತಾರೆ ಇವರೊಂದಿಗೆ 'ವ್ಯವಹರಿಸು'ತ್ತಿದ್ದ ವಾಹನ ಈ ದಾಳಿಯಲ್ಲಿ ಸಿಗದೆ ಹೋಯಿತಾದರೂ ಈ ತಂಡ ಮಾಲು ಸಮೇತ ಸಿಕ್ಕಿದ್ದು ಹಳ್ಳಿಗರಿಗೆ ಸಂತಸ ತಂದಿರುವುದು ಕಂಡು ಬಂತು.

### ಬಿದರಗೋಡಿನಲ್ಲಿ

ಫೆ 19 ರಂದು ಬಿದರಗೋಡಿನಲ್ಲಿ ಮಂಗಳೂರಿಗೆ ಹೋಗುವ ಬಸ್ಸಿನಲ್ಲಿದ್ದ ವ್ಯಕ್ತಿಯೊಬ್ಬನಿಂದ ಸುಮಾರು 2000 ರೂ. ಬೆಲೆಯ 2 ಕಟ್ಟು ಗಂಧವನ್ನು ಗಫಾರ್ ಮತ್ತು ಸಿಬ್ಬಂದಿ ವಶಪಡಿಸಿಕೊಂಡು ಆ ವ್ಯಕ್ತಿಯನ್ನು ಬಂಧಿಸಿದ್ದಾರೆ. ಚನ್ನಗಿರಿ ಕಡೆಯ ಹಕ್ಕಿ ಪಿಕ್ಕಿ [illegible] ಕುಟುಂಬವೊಂದು ಬೇಗಾರಿನ [illegible] ಸುತ್ತಮುತ್ತ ಈ ಧಂಧೆ ನಡೆಸುತ್ತಿರುವುದು ತಿಳಿದು ಬಂದಿದೆ.

# ಕುದುರೆಮುಖ ರಾಷ್ಟ್ರೀಯ ಉದ್ಯಾನ: ಅಧಿಕಾರಿಗಳ ಒಂದು ಪತ್ರ

(ಕುದುರೆಮುಖ ರಾಷ್ಟ್ರೀಯ ಉದ್ಯಾನ ಕುರಿತಂತೆ ಯಾವುದೇ ಮಾಹಿತಿ-ಮಾರ್ಗದರ್ಶನ ಗಳಿದ್ದಲ್ಲಿ ರೈತರಿಗಾಗಿ ಅವನ್ನು ಒದಗಿಸುವಂತೆ ಕೇಳಿದ್ದ ನಮ್ಮ ಪತ್ರಕ್ಕೆ ಸಂಬಂಧ ಪಟ್ಟ ಅಧಿಕಾರಿಗಳಿಂದ ಬಂದ ಉತ್ತರದ ಮುಖ್ಯಾಂಶವನ್ನು ಇಲ್ಲಿ ಪ್ರಕಟಿಸಿದೆ. ಜಿಲ್ಲಾಧಿಕಾರಿಗಳಿಂದಲೂ ಇದೇ ರೀತಿ ಮಾಹಿತಿ ಕೇಳಿ ಪತ್ರ ಬರೆದಿದ್ದೇವೆ. —ಸಂ.)

ರಾಜ್ಯದಲ್ಲಿರುವ ರಾಷ್ಟ್ರೀಯ ಉದ್ಯಾನವನಗಳು ಮತ್ತು ವನ್ಯ ಪ್ರಾಣಿಧಾಮಗಳನ್ನು ಪರಿಶೀಲಿಸಿ ಆಯಾಯ ಅರಣ್ಯ ಮತ್ತು ಪರಿಸರಕ್ಕೆ ಸಂಬಂಧಪಟ್ಟಂತೆ ಪುನರ್ ವಿಂಗಡಿಸಿ ಆ ಪ್ರದೇಶಗಳಲ್ಲಿ ಸಾಕಷ್ಟು ವಿಪುಲವಾಗಿ ಇರುವ ಅಪೂರ್ವವಾದ ಅರಣ್ಯ, ಪ್ರಾಣಿ, ಪರಿಸರ, ಭೂರಚನೆ ಮತ್ತು ಜೈವಿಕ ಸಂಪತ್ತನ್ನು ಸಂರಕ್ಷಿಸುವುದು ಮತ್ತು ಅಭಿವೃದ್ಧಿ ಪಡಿಸಬೇಕೆಂದು ರಾಜ್ಯ ವನ್ಯ ಜೀವಿ ಸಲಹಾ ಮಂಡಳಿ ತೀರ್ಮಾನಿಸಿದ್ದು, ಅದರಂತೆ ಕುದುರೆಮುಖ ಮತ್ತು ಅಣಸಿ (ಉ.ಕ.) ಇವನ್ನು ರಾಷ್ಟ್ರೀಯ ಉದ್ಯಾನವನಗಳನ್ನಾಗಿಯೂ. ಕೊಡಗು ಜಿಲ್ಲೆಯ ತಲಕಾವೇರಿ ಮತ್ತು ಪುಷ್ಪಗಿರಿಯನ್ನು ಪಕ್ಷಿಧಾಮವನ್ನಾಗಿಯೂ ಸರ್ಕಾರವು ಘೋಷಿಸಿದೆ.

ಸದ್ಯದ ಪರಿಸ್ಥಿತಿಯಲ್ಲಿ ಕುದುರೆಮುಖ ರಾಷ್ಟ್ರೀಯ ಉದ್ಯಾನವನದಲ್ಲಿ ಎಲ್ಲೆಗಳನ್ನು ಗುರ್ತಿಸಿ ಅಲ್ಲಿ ಇರತಕ್ಕ ಸಸ್ಯ ಮತ್ತು ಪ್ರಾಣಿ ವರ್ಗಗಳನ್ನು ಸಂರಕ್ಷಿಸುವ ಮತ್ತು ಅಭಿವೃದ್ಧಿ ಪಡಿಸುವ ಕಾರ್ಯಗಳೇ ಹೊರತು ಬೇರೆ ಯಾವುದೇ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದಿಲ್ಲ.

ವನ್ಯಪ್ರಾಣಿ ಸಂರಕ್ಷಣಾ ಕಾಯಿದೆ 1972 ರ ಸೆಕ್ಷನ್ 35(3) ಮತ್ತು ಸೆಕ್ಷನ್ 19 ರಿಂದ 25ರ ಪ್ರಕಾರ ರಾಷ್ಟ್ರೀಯ ಉದ್ಯಾನವನದ ಎಲ್ಲೆಗಳಲ್ಲಿ ವಾಸಿಸುವ ನಿವಾಸಿಗಳ ಹಕ್ಕುದಾರಿಕೆಗಳನ್ನು ತೀರ್ಮಾನಿಸುವುದು ಹಾಗೂ ಸಂರಕ್ಷಿಸುವುದು ಆಯಾ ಜಿಲ್ಲಾಧಿಕಾರಿಯವರ ವ್ಯಾಪ್ತಿಗೆ ಒಳಪಟ್ಟಿದ್ದು, ಈ ಕೆಲಸವನ್ನು ಜಿಲ್ಲಾಧಿಕಾರಿಗಳಿಗೆ ವಹಿಸಿ ಕೊಡಲಾಗಿದೆ.

ಎಂ. ಕೆ. ಅಪ್ಪಯ್ಯ
ಅಧಿಕ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯ ಜೀವಿ ಸಂರಕ್ಷಣೆ, ಬೆಂಗಳೂರು

## ಗಡಿಕಲ್ಲಿನಲ್ಲಿ ಕುವೆಂಪು ಸರ್ಕಲ್

ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳು ಸಂಧಿಸುವಲ್ಲಿ, ಕೊಪ್ಪ ಮತ್ತು ತೀರ್ಥಹಳ್ಳಿ ತಾ|| ಗಳ ಗಡಿಯಲ್ಲಿರುವ ಹಿರೇಕೂಡಿಗೆ ಅಥವಾ 'ಗಡಿಕಲ್'ನಲ್ಲಿ ಶಿವಮೊಗ್ಗ ಜಿಲ್ಲಾ ಪರಿಷತ್ತಿನೊಂದಿಗೆ ಸೇರಿಕೊಂಡು ಕುವೆಂಪುರವರ ಗೌರವಾರ್ಥ 'ಕುವೆಂಪು ಸರ್ಕಲ್' ಒಂದನ್ನು ನಿರ್ಮಿಸಲು ಚಿಕ್ಕಮಗಳೂರು ಜಿಲ್ಲಾ ಪರಿಷತ್ತು ಈಚಿನ ತನ್ನ ಸಭೆಯಲ್ಲಿ ನಿರ್ಣಯಿಸಿದೆ.

ಕುವೆಂಪುರವರ ತವರೂರಾದ ಕುಪ್ಪಳಿ ಈ ಗಡಿಕಲ್‌ನಿಂದ ಕೇವಲ ಒಂದು ಕಿ. ಮೀ. ದೂರದಲ್ಲಿದೆ.

## ಶ್ರೀನಿವಾಸ ಮೂರ್ತಿಯವರ ಲೇಖನಗಳು ಬರಲಿ

ಮಾನ್ಯರೆ,

ನಿಮ್ಮ ಪತ್ರಿಕೆಯಲ್ಲಿ ರಾಜಕೀಯ ಮತ್ತು ಇತರೆ ವಿಚಾರಗಳನ್ನು ಎಂ. ಬಿ. ಶ್ರೀನಿವಾಸಮೂರ್ತಿಯವರು ಹಾಸ್ಯ ಚಾಟಿಯಿಂದ ಜಾರಿಸಿದ್ದು ಈಗ ನಮ್ಮ ನರಸಿಂಹರಾಜಪುರ ತಾಲ್ಲೂಕಿನಲ್ಲಿ ನೂರಕ್ಕೆ ನೂರು ಸತ್ಯವಾಗಿ ಹೊರ ಬರುತ್ತಿದೆ. ಈ ಮುಂದಾಲೋಚನೆಗೆ ಅಭಿನಂದನೆಗಳು.

ಈಗ ಅವರ ಲೇಖನಗಳು ಕಡಿಮೆಯಾಗಿರುವುದು ನಮಗೆ ಬೇಸರವಾಗಿದೆ. ಪುನಃ ಅವರ ಲೇಖನಗಳು ಬರಲಿ ಎಂದು ವಿನಂತಿಸುತ್ತೇವೆ.

ರವಿ, ಟೈಪಿಸ್ಟ್
ಮತ್ತು ಸ್ನೇಹಿತರು,
ಹೆಳುವಳ್ಳಿ ಗ್ರಾಮ, ನ. ರಾ. ಪುರ ತಾ|

## ಪ್ರಾಥಮಿಕ, ಪ್ರೌಢಶಾಲೆಗಳ ಪುನರಾರಂಭದ ವೇಳಾಪಟ್ಟಿ ಬದಲಿಗೆ ಸಲಹೆ

ಶೃಂಗೇರಿ: ಬೇಸಿಗೆ ರಜೆಯ ನಂತರ ಹಿರಿಯ ಮತ್ತು ಕಿರಿಯ ಪ್ರಾಥಮಿಕ ಶಾಲೆಗಳ ಹಾಗೂ ಪ್ರೌಢಶಾಲೆಗಳ ಪುನರಾರಂಭದ ದಿನವನ್ನು ಈ ವರ್ಷದಿಂದ ಮೇ 15 ಕ್ಕೆ ನಿಗದಿಗೊಳಿಸಿರುವುದನ್ನು ಬದಲಿಸಬೇಕೆಂಬ ಅಭಿಪ್ರಾಯ ಅಧ್ಯಾಪಕರ ವಲಯಗಳಲ್ಲಿ ಮೂಡಿಬಂದಿದೆ.

ಮಾಧ್ಯಮಿಕ ಶಾಲೆ ಸೇರಿದು, ಅಲ್ಲಿಂದ ಟಿ. ಸಿ. ಕೊಟ್ಟ ಮೇಲೆ ವಿದ್ಯಾರ್ಥಿಗಳು ಪ್ರೌಢಶಾಲೆಗೆ ಸೇರಬೇಕಾಗಿದ್ದು, ಇದಕ್ಕೆ ಹಿಂದಿನಂತೆಯೇ 8 ದಿನಗಳ ಕಾಲಾವಕಾಶವಾದರೂ ಅಗತ್ಯವೆಂದು ಅಭಿಪ್ರಾಯ ಪಡಲಾಗಿದೆ.

ಹಿಂದೆ ಪ್ರಾಥಮಿಕ ಶಾಲೆಗಳು ಮೇ 22 ರಂದು, ಪ್ರೌಢಶಾಲೆ ಜೂನ್ 1ರಂದು ಪುನರಾರಂಭಗೊಳ್ಳುತ್ತಿದ್ದುದನ್ನು ಇಲ್ಲಿ ಸ್ಮರಿಸಬಹುದು.

## ಕಾಫಿ ಮಂಡಳಿ ಸಬ್ಸಿಡಿಗೆ ಅರ್ಜಿ ಆಹ್ವಾನ

ಕೊಪ್ಪ: 1986ನೇ ಸಾಲಿನಲ್ಲಿ ಹೊಸದಾಗಿ ಕಾಫಿ ಹಾಕಿದ ತೋಟಗಳವರಿಗೆ ಮೊದಲ ಕಂತಿನ, ಹಾಗೂ 1984ರ ಸಾಲಿನವರಿಗೆ 2ನೇ ಕಂತಿನ ಸಹಾಯಧನಕ್ಕಾಗಿ ಕಾಫಿ ಮಂಡಳಿ ಅರ್ಜಿ ಆಹ್ವಾನಿಸಿದೆ. ಅರ್ಜಿ ನಮೂನೆಗಳನ್ನು ಆಯಾ ಸಂಪರ್ಕಾಧಿಕಾರಿಗಳಿಂದ ಪಡೆದು ಅಗತ್ಯ ದಾಖಲಾತಿಗಳೊಂದಿಗೆ ತಕ್ಷಣ ಸಲ್ಲಿಸಲು ಸೂಚಿಸಲಾಗಿದೆ.

ಸ್ಮರಣೆ

# ದಿ|| ಕವಿಲುಕೊಡಿಗೆ ಸುಬ್ಬರಾಯರು

ಬೇರೆಯವರು ಅವರ ಮಾದರಿ ಅನುಸರಿಸಿದ್ದಾರೋ ಇಲ್ಲವೋ— ಆದರೆ ಬೇರೆಯವರಿಗೆ ಮಾದರಿಯಾಗಿ ಬಾಳಿ ಬದುಕಿದ ಮಲೆನಾಡಿನ ಹಲವು ಉದಾತ್ತ ವ್ಯಕ್ತಿಗಳಲ್ಲಿ ಕವಲುಗುಡಿಗೆ (ಕವಿಲುಕೊಡಿಗೆ) ಸುಬ್ಬರಾಯರು ಒಬ್ಬ ಪ್ರಮುಖರು.

ಸರಳತೆ, ಶಿಸ್ತುಬದ್ಧ ಜೀವನ, ವೈಜ್ಞಾನಿಕ ಮನೋಭಾವ, ಕಾಲಕ್ಕನುಗುಣವಾದ ನಡವಳಿಕೆ, ನ್ಯಾಯ ನಿಷ್ಠೆಗಳನ್ನು ಅಳವಡಿಸಿಕೊಂಡು ಸಮೃದ್ಧ ಬದುಕು ಬಾಳಿದ ಸುಬ್ಬರಾಯರು ದಿವಂಗತರಾದುದು 5.2.1987 ರಂದು.

ಕಾಲೇಜು ಮೆಟ್ಟಿಲು ಹತ್ತದಿದ್ದರೂ ಸಹ ತಮ್ಮ ಮತ್ತು ಸುತ್ತಮುತ್ತಲ ಬದುಕಿನ ಸೂಕ್ಷ್ಮ ಅವಲೋಕನ, ಪೂರ್ವಜರ ಮಾರ್ಗದರ್ಶನ ಹಾಗೂ ಓದುವ ಹವ್ಯಾಸಗಳ ದೆಸೆಯಿಂದಾಗಿ ಯಾವುದೇ ಪ್ರೊಫೆಸರೊಬ್ಬರಿಗೆ ಸರಿಗಟ್ಟಬಲ್ಲ ಪಾಂಡಿತ್ಯ ಇವರದಾಗಿತ್ತು. ಇವರ ಜ್ಞಾನದಾಹಕ್ಕೆ ಇವರ ಮನೆಯಲ್ಲಿರುವ ಉತ್ತಮ ಪುಸ್ತಕ ಭಂಡಾರವೇ ಸಾಕ್ಷಿ. ಯಾವುದೇ ವಿಚಾರದಲ್ಲಿ ಪರಿಪೂರ್ಣ ತಿಳುವಳಿಕೆ ಪಡೆದುಕೊಳ್ಳುವ ತವಕ ಮತ್ತು ಅದಕ್ಕೆ ತಕ್ಕ ಪರಿಶ್ರಮ, ತಾವು ಕಂಡ ಸತ್ಯವನ್ನು ಹಿಂಜರಿಯದೆ, ಅಳುಕದೆ ವ್ಯಕ್ತಪಡಿಸುವ ಎದೆಗಾರಿಕೆ, ಪೊಳ್ಳು-ಜೊಳ್ಳು ಮಾತುಗಳಿಂದ ವ್ಯರ್ಥ ಕಾಲ ಹರಣ ಮಾಡದ, ಆದರೆ ಸಜ್ಜನಿಕೆಯ ನಡವಳಿಕೆ ಸುಬ್ಬರಾಯರ ವ್ಯಕ್ತಿತ್ವದ ಎದ್ದುಕಾಣುವ ಅಂಶಗಳಾಗಿದ್ದವು.

ವೃಕ್ಷಪ್ರೇಮಿ-ಪರಿಸರ ಪ್ರೇಮಿಯಾಗಿದ್ದ ಇವರು ಕೃಷಿ ಕ್ಷೇತ್ರದಲ್ಲಂತೂ ಅಪಾರ ಅನುಭವಿ. ಧರ್ಮದ ಹೆಸರಿನಲ್ಲಿ ಮೂಢ ನಂಬಿಕೆ, ಗೊಡ್ಡು ಸಂಪ್ರದಾಯಗಳಿಗೆ ವಿಪರೀತ ಮಣೆ ಹಾಕದ ವಿಶಾಲ ಹೃದಯಿ. ಮದುವೆ-ಮುಂಜಿಗಳಲ್ಲಿ ವಿಪರೀತ ದುಂದು ವೆಚ್ಚ ಮಾಡುವುದನ್ನು ಒಪ್ಪದ, ಸಹಿಸದ ವಾಸ್ತವಪ್ರಜ್ಞ.

ಭವಿಷ್ಯದಲ್ಲಿ ಎದುರಿಸಬೇಕಾಗಬಹುದಾದ ಅನೇಕ ಸಮಸ್ಯೆಗಳಿಗೆ ಸುಮಾರು 50 ವರ್ಷಗಳಷ್ಟು ಮುಂದಾಗಿಯೇ ಪರಿಹಾರ ಕಂಡುಕೊಳ್ಳುವ ಇವರ ದೂರದೃಷ್ಟಿ, ಚಾಣಾಕ್ಷತನಕ್ಕೊಂದು ಉದಾಹರಣೆ: ಮನೆಯಲ್ಲೇ ಗೋಬರ್ ಗ್ಯಾಸ್ ಮತ್ತು ವಿದ್ಯುತ್ ಉತ್ಪಾದನೆಯನ್ನು ಆರಂಭಿಸಿದ ಕರ್ನಾಟಕದ ಪ್ರಪ್ರಥಮ (ಮತ್ತು ಬಹುಶಃ ಏಕೈಕ) ಸುಧಾರಣಾವಾದಿ ರೈತ ಸುಬ್ಬರಾಯರು.

ಇವರ ಕಾನೂನು ಪ್ರಜ್ಞೆ, ನ್ಯಾಯ ನಿಷ್ಠೆ ಉಚ್ಚ ಮಟ್ಟದವು. ಎಂದೂ ತಮ್ಮ ಶ್ರೀಮಂತಿಕೆ ಅಥವಾ ರಾಜಕೀಯ ಪ್ರಭಾವದಿಂದ ತಮ್ಮ ಕೆಲಸಗಳನ್ನು ಮಾಡಿಸಿಕೊಳ್ಳದೆ ಸದಾ ಕಾನೂನಿನ ಚೌಕಟ್ಟಿನಲ್ಲೇ ವ್ಯವಹರಿಸುತ್ತಿದ್ದರು. ಆದರೂ ಭ್ರಷ್ಟ ಅಧಿಕಾರಿಗಳಿಗೆ ಇವರೊಂದು ತರಹ ಸಿಂಹಸ್ವಪ್ನ. ಭೂ ಸುಧಾರಣೆ ಕಾನೂನು ಜಾರಿಗೆ ಬಂದಾಗ ತಮ್ಮ ಅಧೀನವಿದ್ದ ನೂರಾರು ಎಕರೆ ಅಡಿಕೆ ತೋಟ-ಗದ್ದೆಗಳನ್ನು ಗೇಣಿದಾರರಿಗೆ ಖಾತೆ ಹಾಕಿಸಿಕೊಟ್ಟ ಅಪರೂಪದ ಜಮೀನ್ದಾರರು ಸುಬ್ಬರಾಯರು.

ಅಡ್ಡಗದ್ದೆ ಗ್ರಾಮದಲ್ಲಿ ಶಾಲೆಯಿಲ್ಲದೆ ಬವಣೆ ಪಡುತ್ತಿದ್ದಾಗ ತಮ್ಮ ಮನೆಯಲ್ಲೇ ಶಾಲೆ ತೆರೆದು ಅನೇಕರಿಗೆ ವಿದ್ಯಾದಾನ ಮಾಡಿದ ಸುಬ್ಬರಾಯರು ಅಧಿಕಾರ, ಹೊಗಳಿಕೆಗಳನ್ನು ಎಂದೂ ಅಪೇಕ್ಷಿಸದ ಕರ್ಮಯೋಗಿ.

ಮೌಲ್ಯವಂತ ನಡೆ-ನುಡಿ, ಕರ್ತವ್ಯ ನಿಷ್ಠೆ, ಶಿಸ್ತು ಬದ್ಧ ಜೀವನ— ಸುಬ್ಬರಾಯರು ತಮ್ಮ ಮುಂದಿನ ಪೀಳಿಗೆಗೆ ಬಿಟ್ಟು ಹೋದ ಅಮೂಲ್ಯ ಆಸ್ತಿಗಳು.

('ಶೃಂಕೊಸ'ದ ಲೇಖನವೊಂದರ ಆಧಾರ)

(ದಿ| ಸುಬ್ಬರಾಯರ ಸ್ಮರಣೆಗಾಗಿ ಫೆ. 5ಕ್ಕೆ ಪ್ರಕಟವಾಗಬೇಕಾಗಿದ್ದ ಈ ಬರಹವನ್ನು ಸ್ಥಳಾಭಾವದಿಂದಾಗಿ ಈಗ ಪ್ರಕಟಿಸಿದ್ದೇವೆ—ಸಂ.)

# ದಲಿತರ ಮೇಲಿನ ದೌರ್ಜನ್ಯಗಳ ಬಗ್ಗೆ ಜವಾಬ್ದಾರಸ್ಥರಿಗೆ ದುಡುಕು, ಆವೇಶ ಸಲ್ಲ

ಮಾನ್ಯರೆ,

"ಮಲ ತಿನ್ನಿಸಿದ ಕೃತ್ಯ: ಕೆಲವು ಪ್ರತಿಕ್ರಿಯೆಗಳು" ಓದಿದೆ. ಆದರೆ ಕಲ್ಲಯ್ಯನವರು ಬರೆದ ಪ್ರತಿಕ್ರಿಯೆಯಲ್ಲಿ ಕೆಲವು ಟೀಕೆಗಳು ಮಾತ್ರ ಆಕ್ಷೇಪಾರ್ಹವಲ್ಲದೆ ಔಚಿತ್ಯವನ್ನು ಮೀರಿದ್ದು ಜನತಾ ನಾಯಕರುಗಳನ್ನೆಲ್ಲಾ ಸಾರಾ ಸಗಟಾಗಿ ಹೇಲುತಿಂದವರು ಎಂದಿದ್ದಾರೆ. ದಲಿತರ ಮೇಲಿನ ಎಲ್ಲಾ ದೌರ್ಜನ್ಯಗಳಿಗೆ ಜನತಾ ಪಕ್ಷದವರೇ ಕಾರಣವೆ? ಇತರರು ಯಾರೂ ಇಲ್ಲವೆ? ಜನತಾ ಪಕ್ಷೀಯರಲ್ಲೂ ದಲಿತ ಚಳುವಳಿಯ ಬಗ್ಗೆ, ದಲಿತರ ಬಗ್ಗೆ ಬೆಂಬಲ ನೀಡುವ ಮಂದಿ ಎಷ್ಟೋ ಜನ ಇದ್ದಾರೆ.

ಇಂದು ದಲಿತರ ಸಂಘಟನೆ ಬಲವಾಗಿದ್ದರೆ ಅದಕ್ಕೆ ಕಾರಣ ಐದು ವರ್ಷದಿಂದ ಬದಲಾಗಿರುವ ನಮ್ಮ ರಾಜಕೀಯ ವ್ಯವಸ್ಥೆ ಎಂದರೆ ತಪ್ಪಾಗಲಾರದು. ಈ ಹಿಂದೆ ಎಷ್ಟೋ ದಲಿತರ ಮೇಲೆ ದೌರ್ಜನ್ಯ ನಡೆದಾಗ ಯಾರಿಂದಲೂ ಪ್ರತಿಭಟನೆಯ ಸೊಲ್ಲೂ ಎದ್ದಿರಲಿಲ್ಲ.

ಕಲ್ಲಯ್ಯನವರು ಚಿಕ್ಕಮಗಳೂರು ಜಿಲ್ಲಾ ದಲಿತ ಸಂಘಟನೆಯ ಸಂಚಾಲಕರು. ಜವಾಬ್ದಾರಿಯುತ ಸ್ಥಾನದಲ್ಲಿರುವ ಇಂಥವರು, ದುಡುಕು ಮತ್ತು ಆವೇಶಗಳಿಗೆ ಒಳಗಾದರೆ ಯಾವುದೇ ಚಳುವಳಿಯು ಛಿದ್ರಗೊಳ್ಳಲು ಹೆಚ್ಚು ಸಮಯ ಬೇಕಾಗುವುದಿಲ್ಲ.

ಬೆಂಡಿಗೇರಿ, ತತ್ತೂರು ಹಗರಣಗಳ ಬಗ್ಗೆ ಕಲ್ಲಯ್ಯನವರಷ್ಟೇ ನೋವು, ಹೇಸಿಗೆ ಮನುಷ್ಯತ್ವ ಇರುವವರೆಲ್ಲರಿಗೂ ಆಗಿದೆ. ಹಾಗಂತ ಬೇಜವಾಬ್ದಾರಿ ಹೇಳಿಕೆಗಳನ್ನು ನೀಡಿ ಎಲ್ಲರ ಮನನೋಯಿಸುವುದು ಎಷ್ಟು ಸರಿ? ಕಲ್ಲಯ್ಯನವರ ಟೀಕೆಗೆ ಯಾವ ಬೆಲೆ ಬರುತ್ತದೆ? ವಿಧಾನ ಸಭೆಯಲ್ಲಿ 'ಬುದ್ಧಿವಂತ' ಮುಖ್ಯಮಂತ್ರಿ ಹೇಳಿದ ಪೋಲೀಸರ ಮೂಲಕ "ಮಲಕ್ಕೆ ಮಲ ತಿನ್ನಿಸುತ್ತೇವೆ" ಎಂಬ ದೂರದೃಷ್ಟಿ ವಿವೇಚನಾ ರಹಿತ ಹೇಳಿಕೆಯಂತೆಯೇ ಆಗುತ್ತದೆ ಅಷ್ಟೆ.

ಜವಾಬ್ದಾರಿ ಸ್ಥಾನದಲ್ಲಿರುವವರು ಜವಾಬ್ದಾರಿಯುತ, ತೂಕವಾದ ಮಾತು ಆಡಿದರೇ ಚಂದ.

—ಕೃಷ್ಣ ಭಂಡಾರಿ,
ಜಯಪುರ

# ಕುಷ್ಠ ರೋಗ ನಿವಾರಣಾ ದಿನಾಚರಣೆ ಕಾರ್ಯಕ್ರಮ

ಕೊಪ್ಪ : ಕುಷ್ಠ ರೋಗ ಒಂದು ಸಾಂಕ್ರಾಮಿಕ ರೋಗವಾದರೂ ಬೇಗನೆ ಹರಡುವುದಲ್ಲ, ಆನುವಂಶಿಕವಾಗಿ ಬರುವುದಲ್ಲ. ಸಕಾಲಿಕ ಚಿಕಿತ್ಸೆಯಿಂದ ಸಂಪೂರ್ಣವಾಗಿ, ಅಂಗವಿಕಲತೆ ಕೂಡ ಉಂಟಾಗದಂತೆ ಗುಣಪಡಿಸಲು ಸಾಧ್ಯ. ಆದ್ದರಿಂದ ಅದರ ಬಗ್ಗೆ ಯಾರೂ ಹೆದರದೆ, ಕುಷ್ಠ ರೋಗಿಗಳ ಬಗ್ಗೆ ಭಯ ಅಥವಾ ತಾತ್ಸಾರ ತೋರದೆ, ಸರಿಯಾದ ತಿಳುವಳಿಕೆ ಬೆಳೆಸಿಕೊಳ್ಳಬೇಕು. ರಾಷ್ಟ್ರಪಿತ ಗಾಂಧೀಜಿಯವರು ಕುಷ್ಠ ರೋಗಿಗಳನ್ನು ಬಹಳ ಅನುಕಂಪದಿಂದ ಶುಶ್ರೂಷೆ ಮಾಡಿ, ರೋಗದ ನಿರ್ಮೂಲನಕ್ಕಾಗಿ ತಮ್ಮ ಅನುಯಾಯಿಗಳಿಗೆ ಕಾರ್ಯಕ್ರಮ ಹಾಕಿ ಕೊಟ್ಟು ಶ್ರಮಿಸಿದವರು. ಆದ್ದರಿಂದ ಅವರ ಪುಣ್ಯ ತಿಥಿಯಂದು ಕುಷ್ಠರೋಗ ನಿವಾರಣಾ ದಿನಾಚರಣೆ ನಡೆಸಲಾಗುತ್ತಿದೆ ಎಂದು ಕೊಪ್ಪ ಸರ್ಕಾರಿ ಆಸ್ಪತ್ರೆಯ ವೈದ್ಯಾಧಿಕಾರಿ ಡಾ|| ಎಂ. ಜಿ. ಪ್ರಸಾದ್ ಹೇಳಿದರು.

ಕೊಪ್ಪ ಆಸ್ಪತ್ರೆಯಲ್ಲಿ ಈಚಿಗೆ ನಡೆದ ಈ ಕಾರ್ಯಕ್ರಮದಲ್ಲಿ ಎಂ. ಎಸ್. ಲಕ್ಷ್ಮಣ ರಾವ್ ಸ್ವಾಗತಿಸಿದರು. ಕುಷ್ಠ ರೋಗ ವಿಭಾಗದ ಕಾರ್ಯಕರ್ತ ಬಿ. ಎನ್. ರಾಮ ಮೂರ್ತಿ ಈ ರೋಗ ನಿರ್ಮೂಲನೆಯಲ್ಲಿ ಸಾರ್ವಜನಿಕರ ಪಾತ್ರ ವಿವರಿಸಿದರು. ಈ ರೋಗದ ಬಗ್ಗೆ ಸಮೀಕ್ಷೆ, ಪರೀಕ್ಷೆಗಾಗಿ ಆರೋಗ್ಯ ಕಾರ್ಯಕರ್ತರು ಮನೆಗೆ ಬಂದಾಗ ಜನರು ಅವರೊಂದಿಗೆ ಮುಕ್ತ ಮನಸ್ಸಿನಿಂದ ಸಹಕರಿಸಬೇಕೆಂದೂ, ಅನುಮಾನಾಸ್ಪದವಾದ, ಸ್ಪರ್ಶಜ್ಞಾನವಿಲ್ಲದ ಕಲೆಗಳು, ಮಚ್ಚೆಗಳು ಮೈಮೇಲೆ ಕಾಣಿಸಿಕೊಂಡರೆ ಕೂಡಲೇ ವೈದ್ಯರಿಂದ ಪರೀಕ್ಷಿಸಿಕೊಳ್ಳಬೇಕೆಂದೂ ಮನವಿ ಮಾಡಿದರು.

ಡಾ|| ಸತೀಶ್‌ರವರು ವಂದನಾರ್ಪಣೆ ಮಾಡುತ್ತಾ, “ಕುಷ್ಠ ರೋಗವು ಸೂಕ್ಷ್ಮ ರೋಗಾಣುಗಳಿಂದ ಬರುವಂಥದು; ದೈವ ಶಾಪದಿಂದಾಗಲಿ, ಪಾಪಕರ್ಮದಿಂದಾಗಲಿ ಬರುವಂಥದಲ್ಲ. ಇದಕ್ಕೆ ಚಿಕಿತ್ಸೆ ಸುಲಭ ಮತ್ತು ಉಚಿತ. ಆದರೆ ಈ ರೋಗದ ಬಗ್ಗೆ ಜನರಲ್ಲಿ ತಪ್ಪು ಕಲ್ಪನೆಯಿದೆ, ಮೂಢ ನಂಬಿಕೆಗಳೂ ಇವೆ. ಅದನ್ನೆಲ್ಲ ತೊರೆದು, ರೋಗಿಗಳಿಗೆ ಸತತ ಚಿಕಿತ್ಸೆ ಪಡೆಯಲು ಪ್ರೇರೇಪಿಸಿ ಎಂದು ಕರೆ ನೀಡಿದರು.

### ಹಿರೇಕೊಡಿಗೆಯಲ್ಲಿ

ಇದೇ ಕಾರ್ಯಕ್ರಮ ಸ್ಥಳೀಯ ವಯೋವೃದ್ಧ ಗಣ್ಯರಾದ ಸಿದ್ದಪ್ಪ ನಾಯ್ಕರ ಅಧ್ಯಕ್ಷತೆಯಲ್ಲಿ ನಡೆಯಿತು. ವೈದ್ಯಾಧಿಕಾರಿ ಡಾ|| ಮೋಹನ್ ಕುಮಾರ್ ಮತ್ತು ಬಿ. ಎನ್. ರಾಮಮೂರ್ತಿ ರೋಗದ ಬಗ್ಗೆ, ಚಿಕಿತ್ಸೆ ಬಗ್ಗೆ ಮಾಹಿತಿ ನೀಡಿದರು. ಹೊಸಮನೆ ರಮೇಶ್, ರಾಜಾಚಾರಿ, ಆರ್. ಚಂದ್ರಪ್ಪ ಗೌಡ ಮಾತನಾಡಿದರು. ಶಂಕರನಾರಾಯಣ ಉಡುಪ, ತಿಮ್ಮಯ್ಯ ನಾಯ್ಕ್ ಅತಿಥಿಗಳಾಗಿದ್ದರು. ಎಚ್. ಟಿ. ರುದ್ರಪ್ಪ ಸ್ವಾಗತಿಸಿ, ಲಕ್ಷ್ಮಣ ರಾವ್ ವಂದಿಸಿದರು.

## ಸಾಲ ಮರು ಪಾವತಿ: ರೈತರಿಗೆ ಭೂಬ್ಯಾಂಕ್ ಮನವಿ

ಲೋಕನಾಥಪುರ: ರೈತರು ಪಾವತಿಸಬೇಕಾದ ಸಾಲದ ಈ ವರ್ಷದ ಕಂತುಗಳನ್ನು 29 2 88 ರೊಳಗಾಗಿ ಮರುಪಾವತಿ ಮಾಡಿದರೆ ಶೇ' 5.5ರ ವರೆಗೆ ಬಡ್ಡಿ ರಿಯಾಯಿತಿ, 30.6.87ಕ್ಕೆ ಸುಸ್ತಿ ಕಂತುಗಳನ್ನುಳ್ಳವರು ಅಸಲನ್ನು ಮಾತ್ರ ಪಾವತಿಸಿ ಬಡ್ಡಿ, ಸುಸ್ತಿ ಬಡ್ಡಿ ವಿನಾಯ್ತಿ ಪಡೆಯುವ ಸೌಲಭ್ಯ— ಇವುಗಳನ್ನು ಸದುಪಯೋಗಪಡಿಸಿಕೊಂಡು, ಕಳೆದ ವರ್ಷದಂತೆಯೇ ಈ ಸಾಲಿನಲ್ಲಿ ಕೂಡ ಅತ್ಯುತ್ತಮ ವಸೂಲಾತಿಗಾಗಿ ರಾಜ್ಯದಲ್ಲಿ ಪ್ರಥಮ ಸ್ಥಾನ ಪಡೆಯಲು ನೆರವಾಗಬೇಕೆಂದು ಕರಿಮನೆ ಭೂ ಬ್ಯಾಂಕ್ ರೈತರಲ್ಲಿ ಮನವಿ ಮಾಡಿದೆ.

## ಸ್ವಯಂ ಸೇವಕರ ಹುದ್ದೆಗೆ ಕರೆ

1988-89ನೇ ಸಾಲಿಗೆ ಚಿಕ್ಕಮಗಳೂರಿನ ನೆಹರು ಯುವ ಕೇಂದ್ರದಲ್ಲಿ ಖಾಲಿ ಇರುವ ರಾಷ್ಟ್ರೀಯ ಸ್ವಯಂ ಸೇವಕರ ಹುದ್ದೆಗೆ ಅರ್ಹ ಪದವೀಧರ ಯುವಕ/ಯುವತಿಯರಿಂದ 31-3-1988ಕ್ಕೆ 23 ವರ್ಷದೊಳಗಿದ್ದು, ಕಾಲೇಜು ದಿನಗಳಲ್ಲಿ ರಾಷ್ಟ್ರೀಯ ಸ್ವಯಂ ಸೇವೆಯಲ್ಲಿ ಭಾಗವಹಿಸಿದವರಾಗಿ, ಯುವಜನ ಚಟುವಟಿಕೆಯಲ್ಲಿ ಆಸಕ್ತಿಯುಳ್ಳವರಾಗಿರಬೇಕು.

ನಿಗದಿತ ಅರ್ಜಿ ನಮೂನೆಯನ್ನು ನೆಹರು ಯುವ ಕೇಂದ್ರದ ಕಾರ್ಯಾಲಯದಿಂದ ಪಡೆದು ಅವಶ್ಯವಿರುವ ಮಾಹಿತಿಗಳ ಜೊತೆಗೆ ದಿನಾಂಕ : 3-3-88ರೊಳಗೆ ಈ ಕಾರ್ಯಾಲಯಕ್ಕೆ ಸಲ್ಲಿಸತಕ್ಕದ್ದು. ಪರಿಶಿಷ್ಟ ಜಾತಿ/ಪಂಗಡದವರಿಗೆ ಹಾಗೂ ಮಹಿಳಾ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು. ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹೆಯಾನ 450 ರೂ. ಸಂಭಾವನೆಯೊಂದಿಗೆ ತಾಲ್ಲೂಕು ಕೇಂದ್ರಗಳಲ್ಲಿ ಕಾರ್ಯ ನಿರ್ವಹಿಸಲು ನಿಯೋಜಿಸಲಾಗುವುದು.

ದಿನಾಂಕ : 3-3-1988ರೊಳಗೆ ಅರ್ಜಿ ಸಲ್ಲಿಸಿದವರು ದಿನಾಂಕ: 11-3-88 ರಂದು ಮಧ್ಯಾಹ್ನ ಈ ಕಛೇರಿಯಲ್ಲಿ ನಡೆಯುವ ಸಂದರ್ಶನಕ್ಕೆ ಎಲ್ಲಾ ಮೂಲ ಪ್ರಮಾಣ ಪತ್ರಗಳ ಜೊತೆಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು. ಹೆಚ್ಚಿನ ಮಾಹಿತಿ ಬೇಕಾದಲ್ಲಿ ಈ ಕಾರ್ಯಾಲಯದಲ್ಲಿ ಖುದ್ದಾಗಿ ಪಡೆಯಬಹುದು.

ಯುವಜನ ಸಂಯೋಜಕರು, ನೆಹರು ಯುವ ಕೇಂದ್ರ.
(ಜಿಲ್ಲಾ ವಿಭಾಗ), ಚಿಕ್ಕಮಗಳೂರು

# ಕೊಳವೆ ಬಾವಿ ನುಂಗಿದ ಉಪ ಪ್ರಧಾನ !

ಮಾನ್ಯರೆ,

ನ. ರಾ. ಪುರ ತಾಲ್ಲೂಕಿನಲ್ಲಿ ಬಹುತೇಕ ತೆರೆದ ಬಾವಿಗಳೆಲ್ಲ ಬತ್ತಿವೆ. ಮಳೆಗಾಲ ವಿಫಲವಾದ ಬಿಸಿ ತಾಲ್ಲೂಕಿನಾದ್ಯಂತ ತಟ್ಟುತ್ತಿದೆ ಜನ ಆಗಲೇ ನೀರಿಗಾಗಿ ಹಾಹಾಕಾರ ಪಡುತ್ತಿದ್ದಾರೆ.

ಈ ಹಂತದಲ್ಲಿ ಸರ್ಕಾರ ಪ್ರತಿ ಮಂಡಲಕ್ಕೆ ಎರಡು ಕೊಳವೆ ಬಾವಿ ಕೊರೆಸುತ್ತಿದೆಯಂತೆ. ಆದರೆ ಬಾಳೆ ಮಂಡಲ ವ್ಯಾಪ್ತಿಯಲ್ಲಿ ಕೋಗಲ್ಳಿಗೆ ಮಂಜೂರಾಗಿದ್ದ ಒಂದು ಬಾವಿಯನ್ನು ಉಪಪ್ರಧಾನ ವಿ. ಪಿ. ಚೆರಿಯನ್ ಎಂಜಲು ಕಾಸಿನ ಆಸೆಗೆ ಮತ್ತು ಕೀಳು ರಾಜಕೀಯಕ್ಕಾಗಿ ಸಣ್ಣ ಹೊನ್ನೇಹಳ್ಳಿನ ರಬ್ಬರ್ ತೋಟವೊಂದರ ಮಾಲೀಕರ ಖಾಸಗಿ ಜಮೀನಿನಲ್ಲಿ ಕೊರೆಸಿದ್ದಾರೆ.

ಉಪ. ಪ್ರಧಾನರ ಈ ಪಿತೂರಿಯನ್ನು ಮೊದಲೇ ಮನಗಂಡ ಗ್ರಾಮಸ್ಥರು ಮಂ. ಪಂ. ಕಮ್ಯುನಿಸ್ಟ್ ಸದಸ್ಯೆ ಶ್ರೀಮತಿ ಐರೀನ್ ಡಿ' ಸಿಲ್ವ ಅವರ ನೇತೃತ್ವದಲ್ಲಿ ಮಂ. ಪ್ರಧಾನರಿಗೆ ವಿಚಾರ ತಿಳಿಸಿ, ಅವರಿಂದ ಗ್ರಾಮಸ್ಥರಿಗೆ ಅನುಕೂಲವಾಗುವ ಸ್ಥಳದಲ್ಲಿ ಬಾವಿ ಕೊರೆಯುವಂತೆ ಆಜ್ಞೆ ತಂದಾಗ ಚೆರಿಯನ್ ಅದನ್ನು ಒಪ್ಪಿಕೊಂಡಂತೆ ನಟಿಸಿ, ಗ್ರಾಮಸ್ಥರು ಹೇಳಿದ ಸ್ಥಳದಲ್ಲಿ ಕೊರೆಸುವುದಾಗಿ ನಂಬಿಸಿದರು.

ಆದರೆ ಅದನ್ನು ಸುಳ್ಳಾಗಿಸಿ, ಶ್ರೀಮಂತರ ಪರವಾದ ಮತ್ತು ಎಂಜಲು ಕಾಸಿನ ಪರವಾದ ತಮ್ಮ ಧೋರಣೆಯನ್ನೇ ಅವರು ಮುಂದುವರಿಸಿದರು. ರಬ್ಬರ್ ತೋಟದೊಳಗೆ ಬಾವಿ ಕೊರೆಯುವುದನ್ನು ಕಂಡ ಗ್ರಾಮಸ್ಥರು ಸಿಪಿಐ ಮತ್ತು ಕಿಸಾನ್ ಸಭಾ ಕಾರ್ಯಕರ್ತರಾದ ಶ್ರೀಮತಿ ಐರೀನ್, ರಮೇಶ ಪೂಜಾರಿ, ಬಿ. ಟಿ. ಅಶ್ವಿನಿ, ಕೆ. ಎಚ್. ಯೋಗೀಶ ಮುಂತಾದವರ ನೇತೃತ್ವದಲ್ಲಿ ಪ್ರತಿಭಟಿಸಿದರೂ ಬೆಲೆ ಕೊಡದೆ ಅಲ್ಲೇ ಬಾವಿ ಕೊರೆಸಿದ್ದಾರೆ.

ಇದರಿಂದಾಗಿ ಗ್ರಾಮದ ಹತ್ತಾರು ಕುಟುಂಬಗಳು ಕುಡಿವ ನೀರಿನಿಂದ ವಂಚಿತವಾಗಿವೆ. ಈ ದಬ್ಬಾಳಿಕೆ- ಸರ್ವಾಧಿಕಾರಿ ಕ್ಷುದ್ರ ಧೋರಣೆಯನ್ನು ಪ್ರತಿಭಟಿಸಲು ಕಿಸಾನ್ ಸಭಾ ನೇತೃತ್ವದಲ್ಲಿ ಮಂಡಲ ಪಂಚಾಯ್ತಿಗೆ ಘೇರಾವ್ ಮತ್ತು ಪಿಕೆಟಿಂಗ್ ಚಳುವಳಿ ನಡೆಸಲು ಗ್ರಾಮಸ್ಥರು ನಿರ್ಧರಿಸಿದ್ದಾರೆ.

—ಬಿ. ಟಿ. ಅಶ್ವಿನಿ
ಕಾರ್ಯದರ್ಶಿ, ಕಿಸಾನ್ ಸಭಾ
ಬಿ. ಎಚ್. ಕೈಮರ, ನ. ರಾ. ಪುರ ತಾ||

## ಕಾರ್ಮಿಕರ ಮೇಲೆ ಹಲ್ಲೆಯ ಆರೋಪ

ಬಸ್ರಿಕಟ್ಟೆ : ಇಲ್ಲಿಗೆ ಸಮೀಪದ ಮೇರ್ತಿಖಾನ್ ತೋಟದ ಮಾಲೀಕ ವರ್ಗದ ಬೆಂಬಲವಾಗಿ ಅಲ್ಲಿಯ ಕೆಲವು ಮತೀಯವಾದಿಗಳು ಹಾಗೂ ಕಾಂಗ್ರೆಸ್ ಗೂಂಡಾಗಳು ಸೇರಿಕೊಂಡು ಸಂಘಟಿತ ಕಾರ್ಮಿಕರ ಮೇಲೆ ನಿರಂತರವಾಗಿ ಹಲ್ಲೆ ನಡೆಸುತ್ತಿದ್ದಾರೆ. ಮಾಲೀಕರು ಈ ಹಲ್ಲೆಖೋರರಿಗೆ ಹಣ, ಹೆಂಡ ಮತ್ತು ವಾಹನ ಸೌಕರ್ಯವನ್ನು ನೀಡುತ್ತಿದ್ದು, ನಿಷ್ಠಾವಂತ ಕಾರ್ಮಿಕರು ದಾರಿಯಲ್ಲಿ ಓಡಾಡಲು, ಅಂಗಡಿಗಳಲ್ಲಿ ಸಾಮಾನು ಕೊಳ್ಳಲು ಭೀತಿ ಉಂಟಾಗಿದ್ದು, ಅವರಿಗೆ ಶಾಂತಿಯಿಂದ ಬದುಕುವುದು ಕಷ್ಟವಾಗಿದೆ. ಈ ಕೃತ್ಯಕ್ಕೆ ಕರ್ನಾಟಕ ಎಸ್ಟೇಟ್ ಲೇಬರ್ ಯೂನಿಯನ್ ಎಂದು ಹೇಳುವ ಮಾಲೀಕರ ಕೈಗೊಂಬೆ ಸಂಘವು ಸಹ ಬೆಂಬಲ ನೀಡುತ್ತಿದೆ ಎಂದು ಎ.ಐ.ಟಿ.ಯು.ಸಿ. ಪ್ರಧಾನ ಕಾರ್ಯದರ್ಶಿ ರೇಣುಕಾರಾಧ್ಯ ಆಪಾದಿಸಿದ್ದಾರೆ.

ಈ ಬಗ್ಗೆ ಈಗಾಗಲೇ ಸಂಬಂಧಪಟ್ಟ ಅಧಿಕಾರಿಗಳಿಗೆ ದೂರು ಸಲ್ಲಿಸಿದ್ದು, ಕೂಡಲೇ ಮಾಲೀಕರು ಮತ್ತು ಅವರ ಬೆಂಬಲಿಗರು ಈ ದೌರ್ಜನ್ಯವನ್ನು ನಿಲ್ಲಿಸದಿದ್ದರೆ, ಇದನ್ನು ಸೂಕ್ತವಾಗಿ ಎದುರಿಸಲು ಕಾರ್ಮಿಕರ ಸಂಘ ನಿರ್ಧರಿಸಿದೆ ಎಂದಿದ್ದಾರೆ.

### ದೇವರ ಜಾತ್ರೆಯಲ್ಲಿ ಪರಿಸರ ಶಿಕ್ಷಣ !

(ನಮ್ಮ ಪ್ರತಿನಿಧಿಯಿಂದ)

ನ. ರಾ ಪುರ : ಇಲ್ಲಿಗೆ ಸಮೀಪದ ಕೂಸಗಲ್ಲು ರಂಗನಾಥ ಸ್ವಾಮಿ ಜಾತ್ರೆಯ ಸಂಧರ್ಭದಲ್ಲಿ, ಬೃಹತ್ ನೀರಾವರಿ ಯೋಜನೆಗಳಿಂದಾಗುವ ಪರಿಸರ ನಾಶ ಕುರಿತು ಸಾರ್ವಜನಿಕರಿಗಾಗಿ ಚರ್ಚಾಸ್ಪರ್ಧೆ, ಸಂತರ ಜನಪದ ಗೀತೆ-ಭಕ್ತಿಗೀತೆಗಳ ಸ್ಪರ್ಧೆಗಳು ನಡೆದು, ಜನರನ್ನು ಪ್ರಭಾವಿಸಿದವು. ಜಿಲ್ಲೆಯ ಪರಿಸರ ಸಂರಕ್ಷಣಾ ಚಳುವಳಿಯ ಹಿರಿಯ ಮುಂದಾಳುಗಳು ಭಾಗವಹಿಸಿದ್ದ ಸಾರ್ವಜನಿಕ ಸಮಾರಂಭ ಜಿ. ಪ. ಸದಸ್ಯ ಮಿಾಗ ಚಂದ್ರಶೇಖರ್ ಅಧ್ಯಕ್ಷತೆಯಲ್ಲಿ ನಡೆಯಿತು. ಬಿಡಿಜ ಚಿದಾನಂದ ಹೆಗ್ಗಾರ್ ಬಹುಮಾನ ವಿತರಿಸಿದರು. ಎಂ. ಐ. ಶ್ರೀನಿವಾಸ ಮೂರ್ತಿ ಸ್ವಾಗತಿಸಿ, ವಂದಿಸಿದರು.

### ಹುಲಿಗರಡಿ ಗ್ರಾಮಕ್ಕೆ ವಿದ್ಯುತ್ 'ಸಿಂಗಲ್ ಫೇಸ್'

ಜಯಪುರ: ಇಲ್ಲಿಗೆ ಸಮೀಪದ ಹುಲಿಗರಡಿ ಗ್ರಾಮಕ್ಕೆ ವಿದ್ಯುತ್ ಪೂರೈಕೆ ಸಮರ್ಪಕವಾಗಿಲ್ಲ. ಹೆಗ್ಗಾರುಕೊಡಿಗೆ ಬಳಿಯ ಅರೆಹಳ್ಳದ ಟ್ರಾನ್ಸ್‌ಫಾರ್ಮರ್‌ನಿಂದ ಪೂರೈಕೆಯಾಗುತ್ತಿದ್ದು, ಯಾವಾಗಲೂ 'ಸಿಂಗಲ್ ಫೇಸ್' ಆಗಿ ಮಿಣುಕು ಮಾತ್ರ ಇರುತ್ತದೆ. ಈ ಬಗ್ಗೆ ಹಿಂದೊಮ್ಮೆ ಪತ್ರಿಕೆಯಲ್ಲಿ ಪ್ರಕಟವಾಗಿದ್ದಕ್ಕೆ ಜಯಪುರದ ಆಗಿನ ಕ. ವಿ. ಮಂ. ಅಧಿಕಾರಿ ಅಸಮಾಧಾನಗೊಂಡು, ಪೂರೈಕೆ ಸುಧಾರಣೆಯ ಕೆಲಸ ನಿಲ್ಲಿಸಿದ್ದು ಈವರೆಗೂ ಸುಧಾರಣೆಯಾಗಿಲ್ಲ. ಸಂಬಂಧಪಟ್ಟವರು ಈಗಲಾದರೂ ಗಮನ ಹರಿಸಬೇಕು ಎಂದು ಗ್ರಾಮಸ್ಥರು ಒತ್ತಾಯಿಸಿದ್ದಾರೆ.

### ಉತ್ತಮೇಶ್ವರ-ನಾಗವಾನೆ ಹೊಸ ಜಿ. ಪ. ರಸ್ತೆ

ಉತ್ತಮೇಶ್ವರ: ಇಲ್ಲಿಂದ ನಾಗವಾನೆಗೆ ಹೋಗುವ 4 ಕಿ. ಮಿಾ. ಉದ್ದದ ಹೊಸ ರಸ್ತೆಯೊಂದು ಜಿ. ಪ. ವತಿಯಿಂದ 50 ಸಾವಿರ ರೂ. ವೆಚ್ಚದಲ್ಲಿ ಮಂಜೂರಾಗಿದ್ದು ಇದಕ್ಕಾಗಿ ಶಂಕುಸ್ಥಾಪನೆಯನ್ನು ಜಿ. ಪ. ಸದಸ್ಯ ಬಿ. ಜಿ. ಚಿದಂಬರ್ ಅವರು ಪ್ರಧಾನರಾದ ಆನಂದ ರಾಮ ಭಟ್ಟರ ಅಧ್ಯಕ್ಷತೆಯಲ್ಲಿ ಈಚೆಗೆ ನೆರವೇರಿಸಿದರು. ಈ ರಸ್ತೆ ಮಂಜೂರಾತಿಗೆ ವಿಶೇಷ ಆಸಕ್ತಿ ವಹಿಸಿದ್ದಕ್ಕಾಗಿ ಗ್ರಾಮಸ್ಥರು ಚಿದಂಬರ್ ಗೆ ಅಭಿನಂದನೆ ಸಲ್ಲಿಸಿದ್ದಾರೆ.

**ಕಿರುನೀರು ಸರಬರಾಜು**

ಇಲ್ಲಿ ಕಿರು ನೀರು ಸರಬರಾಜು ಯೋಜನೆಯ ಉದ್ಘಾಟನೆಯನ್ನು ಮಂ. ಪಂ. ಸದಸ್ಯ ಎಲ್. ಟಿ. ಪುಟ್ಟಪ್ಪ ಗೌಡ ಈಚೆಗೆ ನೆರವೇರಿಸಿದರು. ಜಾತ್ರೆಗೆ ಈ ನೀರು ಸರಬರಾಜು ಯೋಜನೆ ಒಂದು ಕೊಡುಗೆಯಾಯಿತು ಎಂದು ಗ್ರಾಮಸ್ಥರು ಸಂತೋಷ ವ್ಯಕ್ತಪಡಿಸಿದ್ದಾರೆ.

### ಶ್ರಮದಾನ

ನ. ರಾ. ಪುರ : ಇಲ್ಲಿಗೆ ಸಮೀಪದ ಶೆಟ್ಟಿಕೊಪ್ಪ ಹಿ. ಪ್ರಾ. ಶಾಲೆಯ ಆಟದ ಮೈದಾನ ನಿರ್ಮಾಣಕ್ಕಾಗಿ ಈಚೆಗೆ ನಡೆದ ಶ್ರಮದಾನದಲ್ಲಿ ಮಂಡಲ ಪ್ರಧಾನ ಚೆನ್ನಯ್ಯ ಗೌಡ, ಸದಸ್ಯೆ ಜಲಜಾಕ್ಷಮ್ಮ, ಜಿಲ್ಲಾ ಯುವಜನ ಒಕ್ಕೂಟದ ಉಪಾಧ್ಯಕ್ಷ ಶರತ್ ಕಲ್ಲೆ, ತಾ|| ಒಕ್ಕೂಟದ ಅಧ್ಯಕ್ಷ ಡಿ. ಕೆ. ಭಾಸ್ಕರ್, ಯುವಕ ಸಂಘ, ಯುವತಿ ಮಂಡಳಿ ಮತ್ತು ಮಹಿಳಾ ಸಮಾಜದ ಸದಸ್ಯರು ಪಾಲ್ಗೊಂಡು ಯಶಸ್ವಿಗೊಳಿಸಿದರು. (ವರದಿ: ಡಿ. ಕೆ. ಭಾಸ್ಕರ್)





ಚಂದಾ ಹಣ ಕಳಿಸಿ ಸಹಕರಿಸಿ
ವಾರ್ಷಿಕ ಚಂದಾ 25 ರೂ.

## ಸಂಕ್ಷಿಪ್ತ ಸುದ್ದಿಗಳು

**ಗ್ರಾಮ ಸಭೆಗಳು**

ಅಗಳಗಂಡಿ: ಈ ಮಂಡಲ ಪಂಚಾಯ್ತಿ ವ್ಯಾಪ್ತಿಯ ಗ್ರಾಮ ಸಭೆಗಳು ಈ ಕೆಳಗಿನಂತೆ ನಡೆಯಲಿದ್ದು, ಆಯಾ ಗ್ರಾಮಸ್ಥರು ಭಾಗವಹಿಸಿ ಸಹಕರಿಸಲು ಪ್ರಧಾನ ಕೆ. ಸಿ. ಸತೀಶ್ ಮನವಿ ಮಾಡಿದ್ದಾರೆ.

ಮಾ. 4 ಬೆಳಿಗ್ಗೆ 9.30ಕ್ಕೆ ಮೇಗೂರು, ಹರಳಾನೆ; ಮಧ್ಯಾಹ್ನ 2.30ಕ್ಕೆ ಹೆಗ್ಗಾರುಕೊಡಿಗೆ; ಮಾ. 5 ಬೆಳಿಗ್ಗೆ ಕೂಳೂರು, ಮಧ್ಯಾಹ್ನ ಹುಲಿಗರಡಿ; ಮಾ. 7 ಬೆಳಿಗ್ಗೆ ಅಗಳಗಂಡಿ, ಮಧ್ಯಾಹ್ನ ದಯಂಬಳ್ಳಿ.

**ರಥೋತ್ಸವ**

ಕೊಪ್ಪ: ಇಲ್ಲಿಗೆ ಸಮೀಪದ ಸಿದ್ಧರಮಠದ ಸಿದ್ಧೇಶ್ವರ ಸ್ವಾಮಿ ರಥೋತ್ಸವ ಮಾ. 3ರಂದು ನಡೆಯಲಿದ್ದು, ಈ ಸಂದರ್ಭದಲ್ಲಿ ನಾಟಕ ಮತ್ತಿತರ ಮನರಂಜನಾ ಕಾರ್ಯಕ್ರಮಗಳು ನಡೆಯುತ್ತವೆ.

**ದಾನಿಗಳ ಫೋಟೋ ಅನಾವರಣ**

ಶಾನುವಳ್ಳಿ: ಇಲ್ಲಿಗೆ ಸಮೀಪದ ಕೋಡೂರಿನ ಹಿ. ಪ್ರಾ. ಶಾಲೆಗೆ ಖುಷ್ಕಿ, ತರಿ ಒಟ್ಟಿಗೆ 3 ಎಕರೆ ಜಮೀನನ್ನು ಈ ಹಿಂದೆಯೇ ದಾನ ಮಾಡಿರುವ ಕೋಡೂರು ನಾಗಪ್ಪ ನಾಯ್ಕ್ ಮತ್ತು ಶ್ರೀಮತಿ ಗೋಪಮ್ಮ ಇವರ ಸ್ಮರಣಾರ್ಥ ಅವರ ಫೋಟೋಗಳ ಅನಾವರಣ ಫೆ. 12ರಂದು ಶಾಲಾ ವಾರ್ಷಿಕೋತ್ಸವದ ಸಂದರ್ಭದಲ್ಲಿ ನಡೆಯಿತು.

### ಕಲ್ಲುಗುಡ್ಡೆ ಗ್ರಾಮಕ್ಕೆ ಆರೋಗ್ಯ ಸಹಾಯಕರಿಲ್ಲ

ಕಲ್ಲುಗುಡ್ಡೆ : ಈ ಗ್ರಾಮದ ಮನೆಗಳಿಗಾಗಲಿ, ಅಂಗನವಾಡಿಗಾಗಲಿ ಆರೋಗ್ಯ ಸಹಾಯಕಿಯವರು ಭೇಟಿ ಕೊಡುತ್ತಿಲ್ಲ ಎಂದು ಗ್ರಾಮಸ್ಥರು ತಿಳಿಸಿದ್ದಾರೆ. ಕೊಗ್ರೆಯಲ್ಲಿ ಇವರ ಕೇಂದ್ರ ಸ್ಥಾನವಾಗಿದ್ದು, ಮೂರ್ನಾಲ್ಕು ಮೈಲಿ ನಡೆಯಬೇಕಾಗಿರುವುದೇ ಇವರ ಸಮಸ್ಯೆ ಎನ್ನಲಾಗಿದ್ದು ಮೇಲಧಿಕಾರಿಗಳು ಗ್ರಾಮದ ಆರೋಗ್ಯ ಪರಿಚಾರಿಕೆಗಾಗಿ ಸೂಕ್ತ ವ್ಯವಸ್ಥೆ ಮಾಡಬೇಕೆಂದು ಕೋರಿದ್ದಾರೆ.

**ಡಿಡಿಟಿ ಸಿಂಪರಣೆ**

ಅಂತೆಯೇ ಈ ಗ್ರಾಮದಲ್ಲಿ ಡಿಡಿಟಿ ಸಿಂಪರಣೆ ಮಾಡದೆ ಹಲವು ವರ್ಷಗಳೇ ಆಗಿವೆ. ಡಿಡಿಟಿ ಹೊಡೆಯುವವರು ಸಮೀಪದ ನೇರ್ಲಕೊಡಿಗೆ ಎಸ್ಟೇಟ್‌ವರೆಗೆ ಮಾತ್ರ ಬಂದು ಹೋಗಿದ್ದಾರೆ. ವರ್ಷಕ್ಕೊಮ್ಮೆಯಾದರೂ ಸಿಂಪರಣೆಗೆ ಅಧಿಕಾರಿಗಳು ವ್ಯವಸ್ಥೆ ಮಾಡಬೇಕೆಂದು ಗ್ರಾಮಸ್ಥರು ಕೋರಿದ್ದಾರೆ.

**ಶೃಂಗೇರಿ : ಸರ್ಕಾರಿ ನೌಕರರ ಯಶಸ್ವಿ ಮುಷ್ಕರ**

ಶೃಂಗೇರಿ : ರಾಜ್ಯ ಸರ್ಕಾರಿ ನೌಕರರ ಸಂಘದ ಕರೆಯ ಮೇರೆಗೆ ಇಲ್ಲಿನ ಎಲ್ಲಾ ನೌಕರರು ತಾ|| ಸಂಘದ ಅಧ್ಯಕ್ಷ ಶಂಕರನಾರಾಯಣ ಶೆಟ್ಟಿಯವರ ನೇತೃತ್ವದಲ್ಲಿ ಫೆ. 10ರಂದು 1 ದಿನದ ಸಾಂಕೇತಿಕ ಮುಷ್ಕರವನ್ನು ಯಶಸ್ವಿಯಾಗಿ ನಡೆಸಿದರು.

**ಮಾ. 13ರಂದು ನ. ರಾ. ಪುರಕ್ಕೆ ಸಚಿವ ಅಮರನಾಥ ಶೆಟ್ಟಿ**

ನ. ರಾ. ಪುರ : ಇಲ್ಲಿನ ಬಸ್ತಿಮಠದಲ್ಲಿ ಜ್ವಾಲಾಮಾಲಿನಿ ರಥೋತ್ಸವ ಮಾ. 14ರಂದು ನಡೆಯಲಿದ್ದು, 13ರ ಸಂಜೆ ನಡೆಯುವ ಕಾರ್ಯಕ್ರಮದಲ್ಲಿ ಧಾರ್ಮಿಕ ದತ್ತಿ ಸಚಿವ ಅಮರನಾಥ ಶೆಟ್ಟಿ 1 ಲಕ್ಷ ರೂ. ವೆಚ್ಚದ ಮಾನಸ್ತಂಭಕ್ಕೆ ಶಂಕು ಸ್ಥಾಪನೆ ನೆರವೇರಿಸುವರು. 'ಸಮಂತಭದ್ರ ವಾಣಿ' ಧಾರ್ಮಿಕ ಪತ್ರಿಕೆಯ ವಿಶೇಷ ಸಂಚಿಕೆಯನ್ನು ಶಾಸಕ ಗೋವಿಂದ ಗೌಡರು ಬಿಡುಗಡೆ ಮಾಡುವರು ಎಂದು ಮಠದ ವಕ್ತಾರರೊಬ್ಬರು ತಿಳಿಸಿದ್ದಾರೆ.

### ಅಡಿಕೆ ಧಾರಣೆ

**ಶಿವಮೊಗ್ಗ 25-2-1988**

| | |
|---|---|
| ಸರಕು | 3690 - 4336 |
| ಬೆಟ್ಟೆ | 2409 - 2951 |
| ಗೊರಬಲು | 952 - 1301 |
| ಇಡಿ | 1110 - 1683 |

ವ್ಯಾಪಾರ ಚೆನ್ನಾಗಿ ಆಗುತ್ತಿದ್ದು, ಬೆಟ್ಟೆಗೆ ಈ ವಾರ ಸ್ವಲ್ಪ ಏರಿಕೆ ಕಂಡುಬರುತ್ತಿದೆ. ಸರಕು ವಾರವೆಲ್ಲಾ ಸಾಮಾನ್ಯ ಒಂದೇ ರೀತಿ ಇದೆ. (ಚಾವಲ್ಮನೆ ಸತೀಶ್)



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀಪಟಿಗೆ ಅಚ್ಚುಕೂಟ, ಕೊಪ್ಪ